# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು | : | ಶ್ರೀ ಅರವಿಂದ ಕುಮಾರ ಅರಳಿ(ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 102 (1030) |
| ಉತ್ತರಿಸಬೇಕಾದ ದಿನಾಂಕ | : | 29-09-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ನಗರದಲ್ಲಿ ಜರುಗುತ್ತಿರುವ 2016-17ನೇ ಸಾಲಿನ ನಗರೋತ್ಥಾನ-3 ರ (SCP/TSP) ಕಾಮಗಾರಿಗಳು ನಿಯಮ ಉಲಂಘಿಸಿ ಸಾಮಾನ್ಯ ಕ್ಷೇತ್ರಗಳಲ್ಲಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದಲ್ಲಿ; ಈ ನಿಯಮ ಉಲಂಘನೆ ಮಾಡಿದ ಅಧಿಕಾರಿಗಳ ವಿರುದ್ಧ ಸರ್ಕಾರದ ಕ್ರಮವೇನು; ಬಾರದೇ ಇದ್ದಲ್ಲಿ ಅವುಗಳ ತನಿಖೆ ಮಾಡುವ ಯೋಚನೆ ಸರ್ಕಾರಕ್ಕೆ ಇದೆಯೇ? | ನಗರೋತ್ಥಾನ (ಮುನಿಸಿಪಾಲಿಟಿ)-3ನೇ ಹಂತದ ಯೋಜನೆಯಡಿ ಬೀದರ ನಗರಸಭೆ ವ್ಯಾಪ್ತಿಯಲ್ಲಿ ವಿವಿಧ ಅಭಿವೃದ್ಧಿ ಕಾಮಗಾರಿಗಳು ಕೈಗೊಳ್ಳಲು ರೂ.3500.00 ಲಕ್ಷಗಳ ಅನುದಾನ ಹಂಚಿಕೆಯಾಗಿರುತ್ತದೆ. ಯೋಜನೆಯ ಮಾರ್ಗಸೂಚಿಯಂತೆ ಹಂಚಿಕೆಯ ಮೊತ್ತದ ಶೇಕಡ 85 ರಷ್ಟು ಅಂದರೆ ರೂ.2975.00 ಲಕ್ಷಗಳಿಗೆ ಕ್ರಿಯಾಯೋಜನೆಗೆ ಅನುಮೋದನೆಯಾಗಿರುತ್ತದೆ. ಸದರಿ ಯೋಜನೆಯಡಿಯಲ್ಲಿ ಬೀದರ ನಗರಸಭೆಯಲ್ಲಿ ಒಟ್ಟು 23 ಕಾಮಗಾರಿಗಳ ಪೈಕಿ ಎಸ್.ಸಿ.ಪಿ ಘಟಕದಡಿ ರೂ.510.21 ಲಕ್ಷಗಳ ಮೊತ್ತದಲ್ಲಿ 07 ಕಾಮಗಾರಿಗಳು (36 ಉಪ ಕಾಮಗಾರಿಗಳು), ಟಿ.ಎಸ್.ಪಿ. ಘಟಕದಡಿ ರೂ. 206.75 ಲಕ್ಷಗಳ ಮೊತ್ತದಲ್ಲಿ 03 ಕಾಮಗಾರಿಗಳು (14 ಉಪ ಕಾಮಗಾರಿಗಳು) ಹಾಗೂ ಬಾಕಿ ಉಳಿದ ಮೊತ್ತ ರೂ.2258.03 ಲಕ್ಷಗಳಲ್ಲಿ 13 ಕಾಮಗಾರಿಗಳು (ನೀರು ಸರಬರಾಜು, ಸಿ.ಸಿ. ರಸ್ತೆ, ಚರಂಡಿ ಮತ್ತು ಇನ್ನಿತರ ಕಾಮಗಾರಿಗಳು) ಸಾಮಾನ್ಯ ಘಟಕದಡಿ ಅನುಮೋದನೆಯಾಗಿರುತ್ತದೆ. ಪ್ರಸ್ತುತ ಎಸ್.ಸಿ.ಪಿ. ಘಟಕದ 36 ಉಪ ಕಾಮಗಾರಿಗಳಲ್ಲಿ 21 ಕಾಮಗಾರಿಗಳು ಪೂರ್ಣಗೊಂಡಿದ್ದು, 15 ಕಾಮಗಾರಿಗಳನ್ನು ಪ್ರಾರಂಭಿಸಬೇಕಾಗಿದೆ. ಟಿ.ಎಸ್.ಪಿ. ಘಟಕದ 14 ಉಪ ಕಾಮಗಾರಿಗಳಲ್ಲಿ 3 ಕಾಮಗಾರಿಗಳು ಪೂರ್ಣಗೊಂಡಿದ್ದು 11 ಪ್ರಾರಂಭಿಸಬೇಕಾಗಿದೆ.<br><br>ನಗರೋತ್ಥಾನ (ಮುನಿಸಿಪಾಲಿಟಿ)-3ನೇ ಹಂತದ ಯೋಜನೆಯಡಿ ಬೀದರ ನಗರಸಭೆಗೆ ಹೆಚ್ಚುವರಿಯಾಗಿ ರೂ.2500.00 ಲಕ್ಷಗಳ ಅನುದಾನ ಹಂಚಿಕೆಯಾಗಿರುತ್ತದೆ. ಸದರಿ ಅನುದಾನದಲ್ಲಿ ಒಟ್ಟು 31 ಕಾಮಗಾರಿಗಳ ಪೈಕಿ ಎಸ್.ಸಿ.ಪಿ ಘಟಕದಡಿ ರೂ.428.75 ಲಕ್ಷಗಳ ಮೊತ್ತದಲ್ಲಿ 05 ಕಾಮಗಾರಿಗಳು (35 ಉಪ ಕಾಮಗಾರಿಗಳು), ಟಿ.ಎಸ್.ಪಿ. ಘಟಕದಡಿ ರೂ.173.75 ಲಕ್ಷಗಳ ಮೊತ್ತದಲ್ಲಿ 03 ಕಾಮಗಾರಿಗಳು (10 ಉಪ ಕಾಮಗಾರಿಗಳು) ಹಾಗೂ ಬಾಕಿ ಉಳಿದ ಮೊತ್ತ ರೂ.1822.50 ಲಕ್ಷಗಳಲ್ಲಿ 23 ಕಾಮಗಾರಿಗಳು (ನೀರು ಸರಬರಾಜು, ಸಿ.ಸಿ. ರಸ್ತೆ, ಚರಂಡಿ ಮತ್ತು ಇನ್ನಿತರ ಕಾಮಗಾರಿಗಳು) ಅನುಮೋದನೆಯಾಗಿರುತ್ತದೆ. ಪ್ರಸ್ತುತ ಎಸ್.ಸಿ.ಪಿ. ಘಟಕದ 35 ಉಪ ಕಾಮಗಾರಿಗಳಲ್ಲಿ 15 ಕಾಮಗಾರಿಗಳು ಪ್ರಗತಿಯಲ್ಲಿದ್ದು, ಇನ್ನು 20 ಕಾಮಗಾರಿಗಳು |

| | | |
|---|---|---|
| | | ಪ್ರಾರಂಭಿಸಬೇಕಾಗಿರುತ್ತದೆ. ಟಿ.ಎಸ್.ಪಿ. ಘಟಕದ 10 ಉಪ ಕಾಮಗಾರಿಗಳ ಪೈಕಿ 3 ಕಾಮಗಾರಿಗಳು ಪ್ರಗತಿಯಲ್ಲಿದ್ದು, ಬಾಕಿ 7 ಕಾಮಗಾರಿಗಳನ್ನು ಪ್ರಾರಂಭಿಸಬೇಕಾಗಿರುತ್ತದೆ.<br><br>ನಗರೋತ್ಥಾನ ಯೋಜನೆಯಡಿ ಎಸ್‌ಸಿಪಿ/ ಟಿಎಸ್‌ಪಿ ಕಾಮಗಾರಿಗಳನ್ನು ನಿಯಮ ಉಲಂಘಿಸಿ ಸಾಮಾನ್ಯ ಕ್ಷೇತ್ರದಲ್ಲಿ ನಿರ್ವಹಿಸಿರುವುದು. ಪ್ರಸ್ತುತ, ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. ಆದರೂ ನಿಯಮ ಉಲಂಘನೆ ಕುರಿತು ಪರಿಶೀಲಿಸಿ ವರದಿ ಸಲ್ಲಿಸುವಂತೆ ದಿನಾಂಕ:01-09-2020 ರಂದು ಜಿಲ್ಲಾಧಿಕಾರಿಗಳ ಕಾರ್ಯಾಲಯದಿಂದ ಪೌರಾಯುಕ್ತರು, ಬೀದರ್ ನಗರಸಭೆ ರವರಿಗೆ ಈಗಾಗಲೇ ಸೂಚಿಸಲಾಗಿರುತ್ತದೆ. ಅದಾಗಿಯೂ ನಿಯಮ ಉಲಂಘಿಸಿ ಕಾಮಗಾರಿಗಳು ಕೈಗೊಂಡಿದ್ದು, ಕಂಡು ಬಂದಲ್ಲಿ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳಲಾಗುವುದು ಹಾಗೂ ಇನ್ನೂ ಪ್ರಾರಂಭ ಆಗದೇ ಇರುವ ಕಾಮಗಾರಿಗಳನ್ನು, ಪ್ರಾರಂಭಿಸುವ ಮುನ್ನ ಪುನರ ಪರಿಶೀಲಿಸಿ ನಿಯಮಾನುಸಾರ ಇದ್ದಲ್ಲಿ ಮಾತ್ರ ಕೈಗೊಳ್ಳಲಾಗುವುದು. ಇಲ್ಲದಿದ್ದಲ್ಲಿ ನಿಯಮಾನುಸಾರ ಸರಿಪಡಿಸಿ ಕಾಮಗಾರಿ ಕೈಗೊಳ್ಳಲಾಗುವುದು. |

ಸಂಖ್ಯೆ:ನಅಇ 89 ಸಮಸ 2020

**(ಡಾ||ನಾರಾಯಣಗೌಡ)**
ಪೌರಾಡಳಿತ ಹಾಗೂ ತೋಟಗಾರಿಕೆ
ಮತ್ತು ರೇಷ್ಮೆ ಸಚಿವರು